ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಕಾರ್ಮಿಕರ ಕ್ಷೇಮಾಭಿವೃದ್ಧಿ ನಿಧಿಯ ಕುರಿತು

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

447 (545) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಕಾರ್ಮಿಕ ಇಲಾಖೆಯಿಂದ ಪ್ರಸ್ತುತ ಜಾರಿ ಮಾಡಲಾಗುತ್ತಿರುವ ರಾಜ್ಯ ಮತ್ತು ಕೇಂದ್ರ ಸರ್ಕಾರದ ಯೋಜನೆಗಳು ಯಾವುವು ;

(ಆ) ರಾಜ್ಯದಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಸಂಸ್ಥೆಗಳಲ್ಲಿ ಕೆಲಸ ಮಾಡುವವರ ಕ್ಷೇಮಾಭಿವೃದ್ಧಿ ಕಾಯಿದೆ-1996ರ ಅಡಿ (Building and Others Construction Workers Welfare Cess Act, 1996) ಇದುವರೆವಿಗೂ ಸೆಸ್ ರೂಪದಲ್ಲಿ ಸಂಗ್ರಹವಾಗಿರುವ ಹಣವೆಷ್ಟು; (ಮಾಹಿತಿ ನೀಡುವುದು)

(ಇ) ಈ ಹಣವನ್ನು ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಕ್ಷೇಮಾಭಿವೃದ್ಧಿಗೆ ಬಳಸಲಾಗುತ್ತಿದೆಯೇ ;

(ಈ) ಹಾಗಿದ್ದಲ್ಲಿ, ಯಾವ ಯಾವ ಯೋಜನೆಯಡಿಯಲ್ಲಿ (ಸ್ಕೀಮ್) ಈ ಹಣವನ್ನು ಬಳಸಲಾಗುತ್ತಿದೆ ; (ಈ ಬಗ್ಗೆ ಯೋಜನಾವಾರು (ಸ್ಕೀಮ್) ವಿವರ ನೀಡುವುದು)

(ಉ) ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕ್ಷೇಮಾಭಿವೃದ್ಧಿ ಮಂಡಳಿಯನ್ನು (Building and Others Construction Welfare Board) ಯಾವಾಗ ರಚನೆ ಮಾಡಲಾಗಿದೆ ; (ಈ ಮಂಡಳಿಯಲ್ಲಿ ಇರುವ ಸದಸ್ಯರುಗಳ ವಿವರ ನೀಡುವುದು) ಮತ್ತು ಇದುವರೆವಿಗೂ ಈ ಮಂಡಳಿಯು ಎಷ್ಟು ಸಭೆಗಳನ್ನು ನಡೆಸಿ, ಕಾರ್ಮಿಕರ ಅಭಿವೃದ್ಧಿಗೆ ಯೋಜನಾವಾರು (ಸ್ಕೀಮ್‌ವಾರು) ಎಷ್ಟು ಹಣವನ್ನು ಬಿಡುಗಡೆ ಮಾಡಿದೆ ಹಾಗೂ ಅನುಷ್ಠಾನಗೊಳಿಸವುದು ಎಷ್ಟು?